ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಗೋಮಾಳ ಜಮೀನುಗಳ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

235 (368) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಡ್ಯ ಜಿಲ್ಲೆಯ ಕಂದಾಯ ಇಲಾಖೆ ವ್ಯಾಪ್ತಿಯಲ್ಲಿ ಬರುವ ಒಟ್ಟು ಗ್ರಾಮಠಾಣಾ ದನಗಳಿಗೆ ಮುಫತ್ತು ಗೋಮಾಳ, ಹುಲ್ಲುಬನಿ, ಗುಂಡುತೋಪು, ಖರಾಬು ಗುಡ್ಡ, ಎ-ಖರಾಬು ಮತ್ತು ಬಿ-ಖರಾಬು ಜಾಗಗಳೆಷ್ಟು; (ಗ್ರಾಮವಾರು ವಿಭಾಗವಾರು ವಿವರ ನೀಡುವುದು)

(ಆ) ಮಂಡ್ಯ ಜಿಲ್ಲೆಯ ವ್ಯಾಪ್ತಿಗೆ ಬರುವ ಕಂದಾಯ ಇಲಾಖೆಗೆ ಒಳಪಡುವ ಜಮೀನನ್ನು ಖಾಸಗಿಯವರು ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; (ಒತ್ತುವರಿಯಾಗಿರುವ ಜಮೀನುಗಳ ಪೂರ್ಣ ಮಾಹಿತಿ ನೀಡುವುದು)

(ಇ) ಮಂಡ್ಯ ಜಿಲ್ಲೆಯ ವ್ಯಾಪ್ತಿಯಲ್ಲಿ ಎಷ್ಟು ಗ್ರಾಮಗಳಿಗೆ ಸ್ಮಶಾಣ ಭೂಮಿ ಮಂಜೂರಾಗಿದೆ; ಹಾಗೂ ಸ್ಮಶಾಣ ಭೂಮಿ ಇಲ್ಲದ ಗ್ರಾಮಗಳಿಗೆ ಭೂಮಿ ಮಂಜೂರು ಮಾಡಲು ಸರ್ಕಾರ ಕೈಗೊಂಡಕ್ರಮಗಳೇನು ?